# ಸಮುದಾಯ ತರಗತಿಗಳ ಪರಿಣಾಮಕಾರಿ ಪ್ರಕ್ರಿಯೆಗಳನ್ನು ಉಳಿಸಿಕೊಳ್ಳುವುದು

ದುರ್ಗೇಶ್ ಕುಮಾರ್ ಮಾನೇರಾವ್

ಶಾಲೆಗಳು ಮುಚ್ಚಿರುವ ಕಳೆದ ಎರಡು ವರ್ಷಗಳಲ್ಲಿ ನಾವು ಹಲವು ಮಂದಿ ಶಿಕ್ಷಕರು ವಿದ್ಯಾರ್ಥಿಗಳೊಂದಿಗೆ ಒಂದಲ್ಲ ಒಂದು ವಿಧದ ಸಂಪರ್ಕಕೊಂಡಿಯನ್ನು, ಮುಖ್ಯವಾಗಿ ಸಣ್ಣ ತಂಡಗಳ ಸಮುದಾಯ ತರಗತಿಗಳ ಮೂಲಕ, ಕಾಯ್ದುಕೊಳ್ಳಲು ಪ್ರಯತ್ನಿಸಿದ್ದೇವೆ. ಇದರಿಂದ ಹೊರಹೊಮ್ಮಿದ ಎರಡು ಗಮನಾರ್ಹ ಅನುಭವಾತ್ಮಕ ಕಲಿಕೆಗಳೆಂದರೆ, ಮೊದಲಿಗೆ, ಮಕ್ಕಳು ನಾನು ಅವರಿಗಾಗಿ ಆಯೋಜಿಸಿದ ವಿವಿಧ ಚಟುವಟಿಕೆಗಳ ರೂಪದಲ್ಲಿ ತಮ್ಮನ್ನು ಕಲೆಯ ಮೂಲಕ ಅಭಿವ್ಯಕ್ತಿಸಲು ಸಾಧ್ಯವಾಯಿತು. ಇದು ಅವರಿಗೆ ಏನಾದರೂ ಹೊಸತನ್ನು ಕಲಿಯುತ್ತಿರಲು ಸಹಾಯಕವಾಯಿತು. ಎರಡನೆಯದಾಗಿ, ನಾವು ಇಂತಹ ಏನನ್ನಾದರೂ ಸಾಮಾನ್ಯ ಶಾಲಾ ದಿನಗಳಲ್ಲೂ ಮುಂದುವರಿಸಬೇಕು ಹಾಗು ಮಕ್ಕಳು ಸರಾಗವಾಗಿ ಕಲಿಯುವಂತೆ ಸ್ಥಳೀಯ ಸಂಪನ್ಮೂಲಗಳನ್ನು ನಮ್ಮ ಬೋಧನೆಯಲ್ಲಿ ಅಳವಡಿಸಿಕೊಳ್ಳಬೇಕು ಎಂಬುದು ನಮಗೆ ಮನವರಿಕೆಯಾಯಿತು.

ನಾನು ಮಕ್ಕಳೊಡನೆ ಜಾನಪದ ಹಾಡುಗಳ ವಿಚಾರವಾಗಿ ಮಾತುಕತೆ ನಡೆಸಿ, ಅವರು ಮದುವೆಗಳಲ್ಲಿ ಅಥವಾ ಇತರೆ ಹಬ್ಬಗಳ ಸಂದರ್ಭದಲ್ಲಿ ಹಾಡುವ ಯಾವುದಾದರೂ ಹಾಡುಗಳು ತಮ್ಮ ಪೋಷಕರಿಗೆ ತಿಳಿದಿದೆಯೇ ಎಂದು ಕಂಡುಕೊಳ್ಳಲು ಹೇಳಿದೆ. ಅವುಗಳನ್ನು ತಮ್ಮ ಪೋಷಕರಿಂದ ಕಲಿತು ಕೆಲವು ಚರಣಗಳನ್ನು ತಂಡದಲ್ಲಿ ಹಾಡಲು ಹೇಳಿದೆ. ಈ ಚಟುವಟಿಕೆ ಮಕ್ಕಳನ್ನು ನಿರಾಳವಾಗಿರುವಂತೆ, ಸಂತೋಷದಿಂದಿರುವಂತೆ ಮಾಡಲು ಬಲು ನೆರವಾಯಿತು. ನಾವು ಹಾಡಿದ್ದೇ ಅಲ್ಲದೆ, ಇತರರ ಹಾಡುಗಳನ್ನೂ ಕೇಳಿದೆವು. ನಾನು ಒಂದು ಮರಾಠಿ ಹಾಗು ಬುಂದೇಲ್‌ಖಂಡಿ ಹಾಡನ್ನು ಹಾಡಿದೆ. ಮಕ್ಕಳು ಹಾಡಲು ಆರಂಭಿಸುತ್ತಿದ್ದಂತೆಯೇ, ಮಾರ್ವಾಡಿ ಹಾಗು ಸ್ಥಳೀಯ ಹಾಡುಗಳ ಮಹಾಪೂರವೇ ಹರಿದು ಬಂತು. ಆದರೆ, ನಾವದನ್ನು ಬರೆದಿಟ್ಟುಕೊಳ್ಳಲಾಗಲಿಲ್ಲ. ಶಾಲೆಗಳ ಬಾಗಿಲು ತೆರೆದ ಬಳಿಕ ಈ ಚಟುವಟಿಕೆಯನ್ನು ಇನ್ನೂ ಸಮರ್ಪಕವಾಗಿ ನಡೆಸಬೇಕೆಂಬ ಯೋಜನೆ ಹಾಕಿಕೊಂಡಿದ್ದೇವೆ.

---ಬಾಕ್ಸ್----ಮಾನವ ಚಟುವಟಿಕೆಗಳ ಮತ್ತು ಸಾಮರ್ಥ್ಯಗಳ ಅತಿ ವೈವಿಧ್ಯಪೂರ್ಣ ವ್ಯಾಪ್ತಿಯನ್ನು ಕಲೆಯು ಹೊಂದಿರುವುದರಿಂದ ಸಾಂಕ್ರಾಮಿಕದ ಆತಂಕ ಹಾಗು ದುಷ್ಪರಿಣಾಮಗಳನ್ನು ಸಮರ್ಥವಾಗಿ ಎದುರಿಸಲು ಮಕ್ಕಳಿಗೆ ಕಲೆಯಿಂದ ನೆರವಾಯಿತು. ಮಕ್ಕಳು ಧನಾತ್ಮಕ ಶಕ್ತಿಯನ್ನು ಉತ್ಪಾದಿಸುವ ಕಲೆಯಲ್ಲಿ ಮಗ್ನರಾಗಿದ್ದರು. ಕಲೆಯು ನಮ್ಮ ಬೋಧನೆ ಮತ್ತು ಶಿಕ್ಷಣದ ಅಂಗವಾಗಿದೆಯೆಂದು ಪೋಷಕರೂ ಕೂಡ ಅರ್ಥಮಾಡಿಕೊಂಡರು.

---ಬಾಕ್ಸ್---ನಾವು ಮುಖ್ಯವಾಗಿ ಹಾಡುಗಳನ್ನು ಬರೆದುಕೊಳ್ಳುವ, ಅವುಗಳಿಗೆ ರಾಗ ಸಂಯೋಜಿಸುವ ಹಾಗು ಅವುಗಳನ್ನು ಹಾಡುವ ಕಡೆ ಗಮನ ಹರಿಸಿದೆವು. ಒಂದೆರೆಡು ಜಾಗೃತಿ ಮೂಡಿಸುವ ಹಾಡುಗಳನ್ನು ಮಕ್ಕಳೇ ಕಟ್ಟಿದರು. ನಾವದನ್ನು "ಕೊರೋನ ಫೇರಿ"ಯಲ್ಲಿ ([i] ಬಳಸಿಕೊಂಡೆವು. ಇದರೊಂದಿಗೆ ಮಕ್ಕಳ ಸೃಜನಶೀಲತೆಯು ವಾಡಿಕೆಯ ಶಾಲಾ ದಿನಗಳಲ್ಲಿ ಕಂಡುಬರುವುದಕ್ಕಿಂತಲೂ ವಿಭಿನ್ನವಾದ ಒಂದು ಹೊಸ ದೆಸೆಯಲ್ಲಿ ಹರಿಯಿತು. ಮೊದಮೊದಲು, ಹಾಡೊಂದಕ್ಕೆ ಹೇಗೆ ರಾಗ ಸಂಯೋಜನೆ ಮಾಡುವುದು ಎಂಬುದರ ಬಗ್ಗೆ ಬಹಳಷ್ಟು ಮಾತುಕಥೆಗಳು ನಡೆದವು. ನಾವು ಹಲವಾರು ಹಾಡುಗಳನ್ನು ಕೇಳಿಸಿಕೊಂಡೆವು. ತಂಡದ ಪ್ರತಿಯೊಬ್ಬರೂ ತಮ್ಮ-ತಮ್ಮ ಮನೆಗಳಲ್ಲಿ ಹಾಡುಗಳನ್ನು ಹೆಚ್ಚು ಗಮನವಿಟ್ಟು ಕೇಳಿಸಿಕೊಂಡ ಅನುಭವಗಳನ್ನು ಹಾಗು ತಮಗೆ ಏನು ಅರ್ಥವಾಯಿತು ಎಂಬುದನ್ನು ಹಂಚಿಕೊಂಡರು. ಐದರಿಂದ ಏಳನೇ ತರಗತಿಯ ಮಕ್ಕಳು ಕೆಲವು ಹಾಡುಗಳನ್ನು ಕಟ್ಟಿದರು. ನಾವು ಹಾಡುಗಳಿಗೆ ರಾಗ ಸಂಯೋಜಿಸುವುದು, ಹಾಡುಗಳನ್ನು ರಚಿಸುವುದು, ಸ್ಥಳೀಯವಾಗಿ

ಲಭ್ಯವಿರುವ ಸಲಕರಣೆಗಳಿಂದ ವಾದ್ಯಗಳನ್ನು ನಿರ್ಮಿಸಿಕೊಳ್ಳುವುದು ಇತ್ಯಾದಿ ವಿಷಯಗಳಲ್ಲಿ ಕಾರ್ಯತತ್ಪರರಾದೆವು. ಮಕ್ಕಳಿಗೆ ಕೆಲವು ಸುಳುಹುಗಳು ಹಾಗು ಉತ್ತೇಜನವಷ್ಟೇ ಸಾಕಾಗಿತ್ತು. ಶಿಕ್ಷಕನಾಗಿ ನಾನು ಮಕ್ಕಳಲ್ಲಿ ಸೃಜನಾತ್ಮಕತೆಯನ್ನು ವೃದ್ಧಿಸುವ ಇಂತಹ ಕೆಲಸವನ್ನು ಸಹಜ ಪರಿಸ್ಥಿತಿಯಲ್ಲೂ ಮುಂದುವರಿಸಿಕೊಂಡು ಹೋಗಬೇಕು ಎಂಬುದನ್ನು ಕಲಿತೆ. ಉನ್ನತ ಪ್ರಾಥಮಿಕ ತರಗತಿಗಳಲ್ಲಿ ಮಕ್ಕಳಿಗೆ ಸಂಗ್ರಹರೂಪದಲ್ಲಿ ಸಂಗೀತಶಾಸ್ತ್ರವನ್ನು ಕಲಿಸಬೇಕು. ಸ್ಥಳೀಯ ಸಂಪನ್ಮೂಲಗಳನ್ನು ಬಳಸಿಕೊಂಡು ಸಂಗೀತ ಶಿಕ್ಷಣವನ್ನು ನೀಡುವ ಹೊಸ ವಿಚಾರಗಳ ಬಗ್ಗೆ ನಾವು ಇನ್ನೂ ಹೆಚ್ಚು ಕಾರ್ಯನಿರತರಾಗುವ ಅಗತ್ಯವಿದೆ. ಈ ಹಿಂದೆ ತರಗತಿಗಳಲ್ಲಿ ತಾಳ ಮತ್ತು ಸ್ವರವಿನ್ಯಾಸಗಳ ಬಗ್ಗೆ ಹೆಚ್ಚಿನದೇನನ್ನೂ ಮಾಡಲಾಗಿರಲಿಲ್ಲ. ಈ ವಿಷಯಗಳ ಬಗ್ಗೆ ಹೆಚ್ಚು ಕೆಲಸವಾಗಬೇಕಿದೆ. ಜಾನಪದ ಸಂಗೀತ ಹಾಗು ಲಘುಸಂಗೀತಗಳನ್ನು ಒಳ್ಳೆಯ ಧ್ವನಿವರ್ಧಕದ ಮೂಲಕ ಆಲಿಸುವುದು ನೆರವಿಗೆ ಬರಬಹುದು. ಈ ಸಮಯದಲ್ಲಿ ನಾವು ಮಕ್ಕಳಿಗೆ ಆಲಿಸುವ ಮತ್ತು ನೋಡುವ ಹಲವು ಅವಕಾಶಗಳನ್ನು ಕಲ್ಪಿಸಿಕೊಟ್ಟೆವು. ಇದು ಅವರ ಅನುಭವವನ್ನು ಸಮೃದ್ಧಗೊಳಿಸಿತಲ್ಲದಲ್ಲದೆ, ಪ್ರದರ್ಶನಗಳನ್ನು ನೀಡುವಾಗಲೂ ಅವರ ಕಲಿಕೆ ಅಲ್ಲಿ ಪ್ರತಿಬಿಂಬಿತವಾಗಿತ್ತು. ಸಂಗೀತ ವಾದ್ಯಗಳೊಂದಿಗೆ ಕಾರ್ಯನಿರತರಾಗುವುದಕ್ಕೆ ಸಂಗೀತ ತರಗತಿಯಲ್ಲಿ ಬೇರೆಯೇ ಆದ ಪಾತ್ರವಿದೆ. ಮಕ್ಕಳು ಸಂಗೀತ ವಾದ್ಯಗಳೊಂದಿಗೆ ಹೆಚ್ಚು ನಿರಾಳವಾಗಿ ಇರುವುದಷ್ಟೇ ಅಲ್ಲದೆ, ಅವರ ದಕ್ಷತೆಯೂ ವೃದ್ಧಿಯಾಗುತ್ತವೆ. ಸಮುದಾಯದಲ್ಲಿ ಕೆಲಸ ಮಾಡುವ ಅನುಭವವು ನಮಗೆ ವಾದ್ಯಗಳನ್ನು ನಿರ್ಮಿಸಿಕೊಳ್ಳುವುದನ್ನು ಒಂದು ಸೃಜನಾತ್ಮಕ ಕಾರ್ಯವನ್ನಾಗಿಸಬಹುದು ಎಂಬುದನ್ನು ಕಲಿಸಿಕೊಟ್ಟಿದೆ. ಮಕ್ಕಳು ತಾವು ಕೇಳಿಸಿಕೊಂಡ ಹಾಡುಗಳನ್ನು ಯಾವುದೇ ಪೂರ್ವಸಿದ್ಧತೆ ಇಲ್ಲದೆ ತಾವೇ ಹೊಂದಿಸಿಕೊಂಡ ವಾದ್ಯಗಳೊಂದಿಗೆ ಅದೆಷ್ಟು ಚೆನ್ನಾಗಿ, ಹೊಸ ರೀತಿಯಲ್ಲಿ ಪ್ರಸ್ತುತಪಡಿಸಬಲ್ಲರು ಎಂಬುದನ್ನು ನಾವು ನೋಡಬಹುದಿತ್ತು. ನಾವಿದನ್ನು ತರಗತಿಗಳಲ್ಲಿ ಸುಯೋಜಿತ ರೀತಿಯಲ್ಲಿ ಮಾಡುವ ಹಾಗು ಮಕ್ಕಳು ಹಾಡನ್ನು ತಕ್ಕಷ್ಟು ಸಮಯ ಕೇಳಿಸಿಕೊಂಡ ಬಳಿಕ ಹೇಗೆ ಪ್ರತಿಕ್ರಿಯಿಸುತ್ತಾರೆ ಎಂಬುದನ್ನು ಪರಿಶೀಲಿಸುವ ಅಗತ್ಯವಿದೆ. ಎಲ್ಲಾ ಮಕ್ಕಳಲ್ಲೂ ಲಯಸೃಷ್ಟಿಯ ಸಾಮರ್ಥ್ಯ ಇರುತ್ತದೆಯೆ? ನಾವು ಯಾವ ಮಕ್ಕಳೊಡನೆ ಕೂಡಿ ಕೆಲಸಮಾಡಿದ್ದೇವೋ ಅವರು ನಾವು ಕೂಡಿ ಕೆಲಸಮಾಡದಿರುವ ಮಕ್ಕಳು ಮಾಡುವುದಕ್ಕಿಂತಲೂ ಇದನ್ನು ಭಿನ್ನವಾಗಿ ಮಾಡುತ್ತಾರೆಯೆ? ಹೊಸತಾಗಿ ಮಗುವೊಂದು ನಮ್ಮೊಂದಿಗೆ ತೊಡಗಿದಾಗ ಯಾವ ರೀತಿಯ ವಿವಿಧ ವಿನ್ಯಾಸಗಳನ್ನು ನೋಡಲು ಸಾಧ್ಯ? ಸಂಗೀತದೊಂದಿಗೆ ಕೆಲಕಾಲ ಕಳೆದ ಮಗು ಬಳಿಕ ಪ್ರಕೃತಿಯಲ್ಲಿ ಸಂಗೀತಕ್ಕೆ ಸಂಬಂಧಿಸಿದ ವಿನ್ಯಾಸಗಳನ್ನು ಅರ್ಥೈಸಿಕೊಂಡು ಅವನ್ನು ತಾನು ನೀಡುವ ಪ್ರದರ್ಶನಗಳಲ್ಲಿ ಬಳಸಬಲ್ಲುದೆ? ನಾವು ಮಕ್ಕಳೊಡನೆ ಒಡನಾಡುವಾಗ ಈ ಪ್ರಶ್ನೆಗಳಿಗೆ ವ್ಯವಸ್ಥಿತ ರೂಪದಲ್ಲಿ ಉತ್ತರಿಸುವ ಅಗತ್ಯವಿದೆ. ಈ ಕ್ಷೇತ್ರದಲ್ಲಿ ಇನ್ನೂ ಮುಂದುವರಿಯುವ ಆಸಕ್ತಿ ಇರುವವರಿಗಾಗಿ ನಾವಿದನ್ನು ದಾಖಲಿಸುವ ಅಗತ್ಯವಿದೆ. ಬರುವ ದಿನಗಳಲ್ಲಿ ಮಕ್ಕಳೊಡನೆ ಹೇಗೆ ಕಾರ್ಯನಿರತರಾಗಲಿದ್ದೇವೆ ಎಂಬುದನ್ನು ಲೇಖನದ ಉಳಿದ ಭಾಗದಲ್ಲಿ ವಿಶದಪಡಿಸುತ್ತೇನೆ.

ಮುಂದಿನ ಹೆಜ್ಜೆಗಳು

----ಬಾಕ್ಸ್---

ಮಕ್ಕಳು ಶಾಲೆಗೆ ಮರಳಿದಾಗ ಅವರು ನಿರಾಳವಾಗಿ ಇರಲು ನೆರವಾಗುವಂತೆ, ನಾವು ಸಮುದಾಯ ಶಾಲೆಯಲ್ಲಿ ಕೆಲವು ಅತ್ಯಂತ ಪರಿಣಾಮಕಾರಿ ಚಟುವಟಿಕೆಗಳನ್ನು ಮಾಡಿದೆವು. ಅವರ ಅನುಭವಗಳನ್ನು ಕುರಿತು ಬರೆಯುವಂತೆ ಹೇಳುವುದು ಅವುಗಳಲ್ಲಿ ಒಂದು. ಈ ಚಟುವಟಿಕೆಯಲ್ಲಿ ಮಕ್ಕಳು ಬಹಳಷ್ಟು ಉತ್ಸಾಹ ತೋರಿದರು. ಇವುಗಳನ್ನು ತರಗತಿಯಲ್ಲಿ ಚರ್ಚಿಸಲು ಕೂಡ ತಕ್ಕಮಟ್ಟಿನ ಕಾಲಾವಕಾಶ ನೀಡಲಾಯಿತು. ಉದಾಹರಣೆಗೆ, ಒಂದು ಮಗು ಶುಚಿತ್ವದ ಬಗ್ಗೆ ತನ್ನ ಅನುಭವ ಹಂಚಿಕೊಂಡಾಗ ಇತರ ಮಕ್ಕಳೂ ತಮ್ಮ ಅಭಿಪ್ರಾಯಗಳನ್ನು ಅದಕ್ಕೆ ಸೇರಿಸಿದರು. ----ಬಾಕ್ಸ್----

ಸಂಗೀತ ಕ್ಷೇತ್ರದಲ್ಲೂ ಈ ಸಾಧ್ಯತೆಯನ್ನು ನಾನು ಕಾಣುತ್ತೇನೆ. ಸಂಗೀತವನ್ನು ಕೇಳಿಸಿಕೊಂಡ ಬಳಿಕ ನಾವು ಮಕ್ಕಳಿಗೆ ಅವರ ಅನುಭವಗಳ ಬಗ್ಗೆ ಬರೆಯುವಂತೆ ಹೇಳಬಹುದು. ಒಂದು ನಿರ್ದಿಷ್ಟ ಪ್ರಕಾರದ ಸಂಗೀತವನ್ನು ಆಲಿಸಿದಾಗ ಅವರಿಗೆ ಹೇಗೆ ಅನ್ನಿಸುತ್ತದೆ ಎಂಬ ವಿಚಾರವಾಗಿ ಇದು ನಮಗೆ ಒಳನೋಟವೊಂದನ್ನು ನೀಡುತ್ತದೆ. ಮಕ್ಕಳು ಯಾವ ವಯಸ್ಸಿನಲ್ಲಿ ಸಂಗೀತದ ವಿಷಯವಾಗಿ ಹೇಗೆ ಯೋಚಿಸುತ್ತಾರೆ ಎಂಬುದನ್ನೂ ದಾಖಲಿಸಬಹುದಾಗಿದೆ. ಇದರಿಂದ ಬೋಧನೆ-ಕಲಿಕೆಯ ಪ್ರಕ್ರಿಯೆಯನ್ನು ಸುಧಾರಿಸಲು ನಮಗೆ ಸಹಾಯವಾಗುತ್ತದೆ. ಚಟುವಟಿಕೆಯೊಂದರ ಬಗ್ಗೆ ಬರೆಯುವುದು ಹಾಗು ತಮ್ಮ ವಿಚಾರಗಳನ್ನು ಮುಕ್ತವಾಗಿ ಅಭಿವ್ಯಕ್ತಿಸುವುದು ಕೂಡ ಭಾಷಾ ಕಲಿಕೆಯ ಉದ್ದೇಶವಾಗಿದ್ದು, ಈ ಎರಡೂ ಜೊತೆ-ಜೊತೆಯಾಗಿ ಸಾಗಬಹುದಾಗಿದೆ. ಇಂತಹ ಚಟುವಟಿಕೆಯ ಅವಧಿ ಎಷ್ಟಕ್ಕೆ ಸೀಮಿತವಾಗಿರಬೇಕು ಎಂಬ ಪ್ರಶ್ನೆ ಉಳಿಯುತ್ತದೆ. ಮಗುವೊಂದು ಸಂಗೀತ ತರಗತಿಯಲ್ಲಿನ ತನ್ನ ಅನುಭವಗಳನ್ನು ಸ್ವತಂತ್ರವಾಗಿ ನಿರೂಪಿಸಲು ಸಾಧ್ಯವಾದರೆ, ಅದನ್ನು ಭಾಷೆಯಂತಹ ಇತರ ಶೈಕ್ಷಣಿಕ ವಿಷಯಗಳಿಗೆ ಸಂಬಂಧಿಸಿದಂತೆ ಹೇಗೆ ಪರಿಗಣಿಸಬೇಕು?

ಸ್ಥಳೀಯ ಸಂಪನ್ಮೂಲಗಳ ಬಳಕೆ

ಸ್ಥಳೀಯ ಭಾಷೆ ಹಾಗು ಸನ್ನಿವೇಶಗಳನ್ನು ಬಳಸಿಕೊಳ್ಳುವುದರಿಂದ ವಿಷಯವನ್ನು ಉತ್ತಮವಾಗಿ ಗ್ರಹಿಸಲು ಮಕ್ಕಳಿಗೆ ಅನುಕೂಲವಾಗುತ್ತದೆ ಎಂಬುದು ಎಲ್ಲರಿಗೂ ತಿಳಿದ ವಿಷಯ. ನಮ್ಮ ಸುತ್ತಮುತ್ತಲಿನ ಪರಿಸರದಿಂದ ಉದಾಹರಣೆಗಳನ್ನು ಎತ್ತಿಕೊಂಡು ಕಲಿಸಲು ಬಳಸಬಹುದಾದ ಹಲವು ವಿಭಿನ್ನ ವಿಧಾನಗಳಿವೆ. ಸಂಗೀತದ ವಿಷಯಕ್ಕೆ ಬಂದರೆ, ತರಗತಿಯಲ್ಲಿ ನಾವು ಸ್ಥಳೀಯ ಹಾಡುಗಳಿಗೆ ಸ್ಥಾನ ನೀಡಿ, ಅವುಗಳನ್ನು ಬರೆದುಕೊಳ್ಳುವುದರಿಂದ ಜಾನಪದ ಹಾಡುಗಳ ಒಂದು ಉತ್ತಮ ಸಂಕಲನ ದೊರೆತಂತಾಗುತ್ತದೆ. ಯಾವ ಜಾನಪದ ಹಾಡುಗಳನ್ನು ಯಾವ ಸಂದರ್ಭದಲ್ಲಿ ಹಾಡುತ್ತಾರೆ, ಈ ಹಾಡುಗಳನ್ನು ಹಾಡುವಾಗ ಯಾವ ವಿಧದ ವಾದ್ಯಗಳನ್ನು ಬಳಸುತ್ತಾರೆ ಹಾಗು ಶಾಸ್ತ್ರೀಯ ಸಂಗೀತದಲ್ಲಿ ಹಾಡುಗಳನ್ನು ಹೇಗೆ ವರ್ಗೀಕರಿಸುತ್ತಾರೆ ಎಂಬ ವಿಷಯಗಳ ಸುತ್ತ ಚರ್ಚೆಗಳನ್ನು ಕೈಗೆತ್ತಿಕೊಳ್ಳಬಹುದು. ಇದನ್ನು ನಾವು ಕಾರ್ಯಯೋಜನೆಯೊಂದರ ಅಂಗವಾಗಿ ಕೂಡ ಹಮ್ಮಿಕೊಳ್ಳುವ ಬಗ್ಗೆ ಯೋಚಿಸಬಹುದು. ಈ ಚಟುವಟಿಕೆಯನ್ನು ಐದರಿಂದ ಏಳನೇ ತರಗತಿಯ ಮಕ್ಕಳೊಡನೆ ಹಮ್ಮಿಕೊಳ್ಳಬಹುದು. ಉನ್ನತ ತರಗತಿಗಳಲ್ಲಿ ಇದನ್ನು ಇತರ ವಿಷಯಗಳೊಡನೆ ಇನ್ನೂ ಹೆಚ್ಚು ಸಂಘಟಿತ ರೀತಿಯಲ್ಲಿ ಮಾಡುವುದು ಪರಿಣಾಮಕಾರಿ. ಉದಾಹರಣೆಗೆ, ಸಮಾಜವಿಜ್ಞಾನದಲ್ಲಿ ಪುರಾತನ ಸ್ಥಳೀಯ ಕಟ್ಟಡ, ದೇವಸ್ಥಾನದ, ಕಲ್ಯಾಣಿಯ ಅಥವಾ ಅಲೆಮಾರಿ ಸಮುದಾಯದ ಸಂಸ್ಕೃತಿಯ ಅನ್ವೇಷಣೆಯಂತಹ ವಿಷಯಗಳೊಂದಿಗೆ ಸಂಗೀತವನ್ನು ಮಿಳಿತಗೊಳಿಸಬಹುದಾಗಿದೆ.

ಸಂಗೀತದಲ್ಲಿ ನಾದ ಗ್ರಹಣದ ವಿಷಯವನ್ನು, ವಾದ್ಯಗಳ ಬಾಹ್ಯ ಹಾಗು ಆಂತರಿಕ ಸ್ವರೂಪಗಳನ್ನು ಮತ್ತು ಅವು ನಾದವನ್ನು ಹೊರಹೊಮ್ಮಿಸುವ ವಿಧಾನಗಳನ್ನು, ಇವೇ ಮೊದಲಾದವುಗಳನ್ನು ಅನ್ವೇಷಿಸಬಹುದು. ಉದಾಹರಣೆಗೆ, ಮಕ್ಕಳಿಗೆ ಬೇಸರ ತರಿಸದೆ ಅವರು ಸಕ್ರಿಯವಾಗಿ, ಹೊಸತನವನ್ನು ಮೆರೆಯುವಂತೆ ಭಾಗಿಯಾಗಲು ಲೋಹದ ಖಾಲಿ ಡಬ್ಬಿಗಳು, ಟಿನ್ ಡಬ್ಬಗಳು, ಕಾರ್ಡ್ ಬೋರ್ಡ್, ರಬ್ಬರ್, ಪ್ಲಾಸ್ಟಿಕ್ ಬಾಟಲಿಗಳು, ಕಬ್ಬಿಣ ಹಾಗು ಕಲ್ಲಿನ ತುಂಡುಗಳು ಇತ್ಯಾದಿಗಳನ್ನು ಮಕ್ಕಳಿಗೆ ನೀಡಿ, ಇವು ಹೊಮ್ಮಿಸಬಹುದಾದ ನಾದಗಳ ಅನ್ವೇಷಣೆಯಲ್ಲಿ ಅವರನ್ನು ತೊಡಗಿಸಬಹುದು.

ಇನ್ನೂ ಹಲವು ವರ್ಗಗಳ ಸಂಪನ್ಮೂಲಗಳು ಇರುವ ಸಾಧ್ಯತೆ ಇದೆ:

ವರ್ಗ 1: ಕಲೆ, ಕರಕುಶಲತೆ ಹಾಗು ಸಂಗೀತ ಶಿಕ್ಷಕರಂತಹ ಶಾಲೆಯಲ್ಲಿ ಲಭ್ಯವಿರುವ ಸಂಪನ್ಮೂಲಗಳು.

ವರ್ಗ 2: ಸ್ಥಳೀಯ ಕಲಾವಿದರು, ಕುಂಬಾರರು, ರೈತರು, ಬಿದಿರು ಹೆಣೆಯುವವರು ಅಥವಾ ಕಲೆಯ ಜ್ಞಾನವಿರುವ ಸಮುದಾಯದ ಸದಸ್ಯರಂತಹ ಶಾಲೆಯ ಹೊರಗೆ ಲಭ್ಯವಿರುವ ಸಂಪನ್ಮೂಲಗಳು.

ವರ್ಗ 3: ನದಿ, ಮರ-ಗಿಡಗಳು, ಎಲೆಗಳು ಮಾಡುವ ಶಬ್ದದಂತಹ ನೈಸರ್ಗಿಕ ಪರಿಸರದಲ್ಲಿನ ಸಂಪನ್ಮೂಲಗಳು ಹಾಗು ಇವನ್ನು ಸಂಗೀತದಲ್ಲಿ ಅಳವಡಿಸಿಕೊಳ್ಳುವ ವಿಧಾನಗಳನ್ನು ಕಂಡುಕೊಳ್ಳುವುದು.

ಶೈಕ್ಷಣಿಕ ವಿಷಯಗಳೊಂದಿಗೆ ಸಂಘಟನೆ

ಸಂಗೀತವನ್ನು ಇತರ ವಿಷಯಗಳೊಂದಿಗೆ ಸಂಘಟಿಸುವ ಅವಕಾಶ ಕಾಣಸಿಗುವ ಎಡೆಯಲ್ಲೆಲ್ಲಾ ಈ ವಿಷಯಗಳನ್ನು ಬೋಧಿಸುವ ಶಿಕ್ಷಕರೊಂದಿಗೆ ಸಂಘಟನೆಯ ಸಾಧ್ಯತೆಯನ್ನು ಅನ್ವೇಷಿಸಬೇಕಿದೆ. ಉದಾಹರಣೆಗೆ, ತ್ಯಾಜ್ಯ ಅಥವಾ ಬಳಸದೇ ಇರುವ ವಸ್ತುಗಳಿಂದ ಸಂಗೀತ ವಾದ್ಯವೊಂದನ್ನು ಮಾಡಿಕೊಳ್ಳುವಾಗ ಶಬ್ದೋತ್ಪತ್ತಿಯ ಹಿಂದಿನ ಕಾರಣವನ್ನು ಅರ್ಥಮಾಡಿಕೊಳ್ಳಲು ವಿಜ್ಞಾನ ಶಿಕ್ಷಕರೊಂದಿಗೆ ಕಲಾಪವೊಂದನ್ನು ಏರ್ಪಡಿಸಿಕೊಳ್ಳುವುದು. ಈ ವಾದ್ಯದ ಸ್ವರೂಪ ಹೇಗಿರಬೇಕು? ಸಂಗೀತದಲ್ಲಿ ಎಲ್ಲಾ ಶಬ್ದಗಳನ್ನು ಬಳಸಬಹುದೇ? ಯಾವ ರೀತಿಯ ಶಬ್ದಗಳು ಸಂಗೀತಕ್ಕೆ ಹೇಗೆ ಉಪಯೋಗಕಾರಿ ಎಂಬುದರ ವಿಷಯವಾಗಿ ಸಂಗೀತ ಶಿಕ್ಷಕರು ಮಕ್ಕಳೊಡನೆ ಸಾಕಷ್ಟು ಕೆಲಸ ಮಾಡಬಹುದಾಗಿದೆ. ಆಯಾ ತರಗತಿಯ ಮಟ್ಟಕ್ಕೆ ಹೊಂದಿಕೊಳ್ಳುವಂತೆ ಇದನ್ನು ಆಯೋಜಿಸಬಹುದಾಗಿದೆ.

ಸದ್ಯಕ್ಕೆ, ನಾವು ಒಂದರಿಂದ ಮೂರನೇ ತರಗತಿಯ ಮಕ್ಕಳೊಂದಿಗೆ, ಇತರ ವಿಷಯಗಳ ಶಿಕ್ಷಕರನ್ನೂ ಒಳಗೊಂಡು, ಸುಮಾರು ಒಂದೂವರೆ ಗಂಟೆಗಳಷ್ಟು ಕಾಲ ಕೆಲಸ ಮಾಡುತ್ತೇವೆ. ಶಿಕ್ಷಕರು ವಿವಿಧ ವಿಷಯಗಳನ್ನು ಇನ್ನೂ ಉತ್ತಮವಾಗಿ ಸಂಘಟಿಸುವ ಅವಕಾಶದ ಸದ್ವಿನಿಯೋಗ ಮಾಡಿಕೊಳ್ಳುತ್ತಿದ್ದಾರೆ. ಇದರಿಂದ ನನಗೂ ಅವರ ಕೆಲಸವನ್ನು ಅರ್ಥಮಾಡಿಕೊಳ್ಳಲು ಸಹಾಯವಾಗುತ್ತಿದೆ.

ಪ್ರಾಯೋಗಿಕ ಚಟುವಟಿಕೆಗಳು

ನಾನು ನನ್ನ ಕಲಾಪವನ್ನು ಧ್ಯಾನದೊಂದಿಗೆ ಪ್ರಾರಂಭಿಸುತ್ತೇನೆ. ನಾವು ಮೊಬೈಲ್ ಫೋನ್ ಬಳಸಿ ಸುಮಧುರ ತಾನ್ಪುರ ಸಂಗೀತವನ್ನು ಒಂದೆರಡು ನಿಮಿಷಗಳ ಕಾಲ ಆಲಿಸುತ್ತೇವೆ. ಸಂಗೀತ ಕೇಳುತ್ತಿರುವಂತೆಯೇ ಉಸಿರಾಟ ಹೇಗಿರಬೇಕು ಎಂಬ ನನ್ನ ಸೂಚನೆಗಳನ್ನು ಮಕ್ಕಳು ಅನುಸರಿಸುತ್ತಾರೆ. ಇದಾದ ಬಳಿಕ ನಾವು ಹಾಡುಗಳೊಂದಿಗೆ ಶುರುಮಾಡುತ್ತೇವೆ. ಮಕ್ಕಳು ಹಾವ-ಭಾವಗಳೊಂದಿಗೆ ಹಾಡುವಾಗ ಶಿಕ್ಷಕರೂ ಜೊತೆಗೂಡುತ್ತಾರೆ.

ಮಕ್ಕಳು ದೊಡ್ಡ ಮತ್ತು ಸಣ್ಣ ಗುಂಪುಗಳಲ್ಲಿ ಹಾಡುತ್ತಾರೆ. ಬಳಿಕ ಶಿಕ್ಷಕರು ಹಾಡೊಂದರಿಂದ ಐದು ಪದಗಳನ್ನು ಆರಿಸಿಕೊಳ್ಳಲು ಮಕ್ಕಳಿಗೆ ಸೂಚಿಸಿ, ಆಯ್ಕೆಮಾಡಿದ ಪದಗಳನ್ನು ಸಣ್ಣ ಕಾರ್ಡಿನ ಮೇಲೆ ಬರೆದುಕೊಳ್ಳುತ್ತಾರೆ. ಇದೀಗ ಮಕ್ಕಳು ಪಾಲ್ಗೊಳ್ಳುವ ಸಮಯ. ಶಿಕ್ಷಕರು ಮಕ್ಕಳನ್ನು ಎರಡು ತಂಡಗಳಾಗಿಸಿ, ಮೊದಲನೇ ತಂಡಕ್ಕೆ ಕಾರ್ಡನ್ನು ತೋರಿಸುತ್ತಾ ಅವರಿಗೆ ಅದರಲ್ಲಿರುವ ಪದಗಳನ್ನು ಓದುವಂತೆ ಹೇಳುತ್ತಾರೆ. ಮಕ್ಕಳು ಪರಸ್ಪರ ನೆರವಾಗುತ್ತಾ, ಈ ಪದಗಳನ್ನು ಓದಲು ಯತ್ನಿಸುತ್ತಾರೆ. ಎರಡನೇ ತಂಡವು ಇದನ್ನು ಗಮನಿಸುತ್ತಾ, ತಮ್ಮ ಸರದಿ ಬಂದಾಗ ಮೊದಲ ತಂಡವು ಪದಗಳ ಉಚ್ಚಾರಣೆಯಲ್ಲಿ ಮಾಡಿದ ತಪ್ಪುಗಳನ್ನು ಮಾಡದೇ ಇರುವಂತೆ ಎಚ್ಚರ ವಹಿಸುತ್ತದೆ. ಇದಾದ ಸ್ವಲ್ಪ ಸಮಯದ ಬಳಿಕ ಮಕ್ಕಳು ಈ ಪದಗಳನ್ನು ಗುರುತಿಸುವಲ್ಲಿ ಎದುರಿಸಿದ ಸಮಸ್ಯೆಗಳೇನು ಹಾಗು ಎರಡನೇ ತಂಡ ಅಳವಡಿಸಿಕೊಂಡ ತಂತ್ರಗಾರಿಕೆ ಏನು ಎಂದು ಅವರನ್ನು ಕೇಳಲಾಗುತ್ತದೆ. ಇದೇ ರೀತಿಯ ಮತ್ತೊಂದು ಚಟುವಟಿಕೆಯಲ್ಲಿ, ಹಾಡಿನಿಂದ ಪಾತ್ರವೊಂದನ್ನು ಆರಿಸಿಕೊಂಡು, ಅದನ್ನು ಆಧರಿಸಿ ಮಕ್ಕಳು ಮನೆಯಲ್ಲಿ ಮಾಡಿಕೊಂಡು ಬರುವಂತಹ ಕೆಲಸ ನೀಡಲಾಗುತ್ತದೆ. ಹೀಗಾಗಿ, ಸಂಗೀತ ಮತ್ತು ಭಾಷೆ,

ಎರಡನ್ನೂ ಸುಲಭವಾಗಿ ಬೋಧಿಸಲಾಗುತ್ತದೆ.  ಜೊತೆಗೆ, ನಾನು ಮಕ್ಕಳ ಸಾಧನೆಗಳನ್ನು, ಅವರ ಹಾಡುಗಳ ರಾಗಗಳನ್ನು, ಅವರ ನಟನಾ ಕೌಶಲವನ್ನು, ಆತ್ಮವಿಶ್ವಾಸವನ್ನು ಹಾಗು ಅವರ ಒಂಟಿ ಮತ್ತು ಜಂಟಿ ಹಾಡುಗಾರಿಕೆಯನ್ನು ಗಮನಿಸುತ್ತಾ ಇರುತ್ತೇನೆ. ಆಲಿಸುವಿಕೆ, ಸ್ಮೃತಿ, ಭಾವಪೂರ್ಣ ಗಾಯನ ಹಾಗು ಬರವಣಿಗೆಯಂತಹ ಅವರ ಭಾಷಾ ಕಲಿಕೆಯ ವಿವಿಧ ಅಂಶಗಳು ಕೂಡ ಈ ವೀಕ್ಷಣೆಯ ಅಂಗವಾಗುತ್ತವೆ. ನಾವು ಇಂಗ್ಲಿಷ್ ಪ್ರಾಸಗೀತೆಗಳನ್ನು ಕಲಿಸಲು ಕೂಡ ಈ ಚಟುವಟಿಕೆಯನ್ನು ಬಳಸಬಹುದಾಗಿದೆ.

ತರಗತಿಗಳಲ್ಲಿ ಮೌನವಾಗಿರುವ, ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸದ ಮಕ್ಕಳೂ ಇರುತ್ತಾರೆ. ನಾವು ಅವರ ಪಾಲ್ಗೊಳ್ಳುವಿಕೆಯನ್ನು ಹೆಚ್ಚಿಸುವ ಅವಕಾಶಗಳನ್ನು ಅವರಿಗೆ ಸಂಗೀತದ ಮೂಲಕ ಕಲ್ಪಿಸಿಕೊಟ್ಟು, ಅವರು ತಮಗೆ ಹಿತಕರವೆನಿಸುವ ವಿಧಾನಗಳ ಮೂಲಕ ತಮ್ಮನ್ನು ಅಭಿವ್ಯಕ್ತಿಸಿಕೊಳ್ಳಲು ನೆರವಾಗಬಹುದು. ಸಂಗೀತ ಮತ್ತು ಕಲೆಗಳು ನಲಿವಿನ ಕಲಿಕೆಗೆ ಹೆಚ್ಚು ಅವಕಾಶಗಳನ್ನು ಕಲ್ಪಿಸಿಕೊಡಬಲ್ಲವು. ಸಂಕೋಚ ಸ್ವಭಾವದ ಮಗುವೊಂದಕ್ಕೆ ನಮ್ಮ ಪ್ರಯತ್ನಗಳು ಹೇಗೆ ನೆರವಾಗುತ್ತಿವೆ ಅಥವಾ ನಮ್ಮ ಕಾರ್ಯನೀತಿಯನ್ನು ಬದಲಿಸಿಕೊಳ್ಳುವ ಅಗತ್ಯವಿದೆಯೆ ಎಂಬುದನ್ನು ಶಿಕ್ಷಕರು ಗಮನಿಸಿ, ಮೌಲ್ಯನಿರ್ಣಯ ಮಾಡಬೇಕಿದೆ.

ಸಮಯ ಮತ್ತು ಪ್ರಭಾವಗಳ ಮುಖಾಮುಖಿ

ಈ ಎಲ್ಲಾ ಚಟುವಟಿಕೆಗಳಿಗೂ ಕಾಲಾಕಾಶದ ಅಗತ್ಯವಿದೆ. ನಾವು ಸಮಯವನ್ನು ಆಯೋಜಿಸುವುದಾದರೂ ಎಂತು? ಸಂಗೀತ ಸಂಬಂಧಿತ ಸಂಶೋಧನೆಯನ್ನು ಕೈಗೊಳ್ಳಲು ಆಗುವಂತೆ ಓರ್ವ ಶಾಲೆಗೆ ಅಥವಾ ಶಾಲಾ ತಂಡಕ್ಕೆ ಹೊಂದಿಕೊಳ್ಳುವುದು ಹೇಗೆ? ಹೊಸ ರೀತಿಗಳಲ್ಲಿ ಯೋಚಿಸಲು ಹಾಗು ಕಾರ್ಯನಿರತರಾಗಲು ಸಾಕಷ್ಟು ಅವಕಾಶವಿದೆ. ಮೊದಲಿನಿಂದಲೂ ಅಭ್ಯಾಸಕ್ಕೆ ಬಹಳಷ್ಟು ಒತ್ತುಕೊಟ್ಟು ಸಂಗೀತವನ್ನು ಕಲಿಸುವುದು ಇವುಗಳಲ್ಲಿ ಒಂದಾಗಿದೆ. ಶಾಲೆಯಲ್ಲಿ ಸಂಗೀತ ಕಲಿಸುವುವಿಕೆಯನ್ನು ಹೇಗೆ ಪರಿಗಣಿಸುತ್ತೇವೆ ಹಾಗು ಈ ಕಲಿಸುವಿಕೆಯನ್ನು ಕಾರ್ಯಗತಗೊಳಿಸುವುದು ಹೇಗೆ ಎಂಬುದನ್ನು ಕುರಿತು ಚಿಂತಿಸುವ ಅಗತ್ಯವಿದೆ.

"ಲಯ ಹಾಗು ನಾದದ ಸೌಂದರ್ಯ, ಈ ಎರಡೂ ನೈತಿಕ ಮತ್ತು ಬೌದ್ಧಿಕ ವಿಕಾಸದ ಮಹತ್ತ್ವಪೂರ್ಣ ಸಾಧನಗಳಾಗಿವೆ" ( ಖhe ಆeಠಿಣhs oಜಿ ಣhe ಅhiಟಜ's ಊeಚಿಡಿಣ, ಗಿಚಿsiಟಥಿ Suಞhomಟiಟಿsಞಥಿ, *The Depths of the Child's Heart,* ವ್ಯಾಸಿಲಿ ಸುಖೋಮ್ಲಿನ್ ಸ್ಕಿ). ಸಂಗೀತವನ್ನು ಕಲಿಸುವುದೆಂದರೆ ಮಕ್ಕಳನ್ನು ಸಂಗೀತಗಾರರನ್ನಾಗಿ ಮಾಡುವುದಲ್ಲ. ಶೈಕ್ಷಣಿಕ ವಿಷಯಗಳು ಮಕ್ಕಳ ಮಾನಸಿಕ ವಿಕಾಸಕ್ಕೆ ಎಡೆಮಾಡುವಂತೆಯೇ ಸಂಗೀತ ಶಿಕ್ಷಣವು ಸ್ವ-ಶಿಕ್ಷಣಕ್ಕೆ ಎಡೆಮಾಡುತ್ತದೆ. ಮಕ್ಕಳಿಗೆ ಸಂಗೀತವನ್ನು ಕಲಿಸುವುದು ಅವರನ್ನು ಉತ್ತಮ ಮಾನವರನ್ನಾಗಿಸಲು ಒದಗಿಬರುವಂತೆಯೇ, ಜಗತ್ತು ಸುಂದರವಾಗಿ ಇರುವಂತೆ ನೋಡಿಕೊಳ್ಳಲು ಕೂಡ ನೆರವಾಗುತ್ತದೆ. ಇದೇ ತಾನೆ ಶಿಕ್ಷಣದ ಪ್ರಾಥಮಿಕ ಗುರಿ? ಎಲ್ಲಾ ಶಾಲೆಗಳಲ್ಲೂ ಸಂಗೀತವನ್ನು — ಸಾರಪಠ್ಯಕ್ರಮದಂತೆ ಅಲ್ಲದಿದ್ದರೂ — ವ್ಯವಸ್ಥಿತ ವಿಧಾನದಲ್ಲಿ ಕಲಿಸುವುದನ್ನು ಖಾತ್ರಿಪಡಿಸಬೇಕಿದೆ.

FIGURE 1 & 2 of Page 3

ಅಡಿಟಿಪ್ಪಣಿ

i. ಭಕ್ತಿಗೀತೆಗಳನ್ನು ಹಾಡುತ್ತಾ ಮೆರವಣಿಗೆಯಲ್ಲಿ ಸಾಗುವ "ಪ್ರಭಾತ್ ಫೇರಿ"ಯ (ಅಕ್ಷರಶಃ, ಬೆಳಗ್ಗಿನ ಸುತ್ತು) ರೀತಿಯಲ್ಲೇ "ಕೊರೋನಾ ಫೇರಿ" ಸಮುದಾಯದಲ್ಲಿ ಕೋವಿಡ್ -19ರ ವಿಷಯವಾಗಿ ಜಾಗೃತಿಯ ಸಂದೇಶವನ್ನು ಹರಡುವ ಆಶಯ ಹೊಂದಿದೆ.

ದುರ್ಗೇಶಕುಮಾರ್ ಮಾನೇರಾವ್ ಅವರು ರಾಜಸ್ಥಾನದ ಟಾಂಕ್ನಲ್ಲಿರುವ ಅಜೀಂ ಪ್ರೇಮ್‌ಜಿ ಶಾಲೆಯ ಸಂಗೀತ ಶಿಕ್ಷಕರಾಗಿದ್ದಾರೆ. ಮಧ್ಯಪ್ರದೇಶದ ಛಿಂದ್ವಾಡಾ ಜಿಲ್ಲೆಯವರಾದ ಇವರು ಅಜೀಂ ಪ್ರೇಮ್‌ಜಿ ಫೌಂಡೇಶನ್ನೊಂದಿಗೆ 2016ರಿಂದ ಕೆಲಸ ಮಾಡುತ್ತಿದ್ದಾರೆ. ಇದಕ್ಕೂ ಮುನ್ನ ಅವರು ಜೈಪುರದ ಬೋಧ್ ಶಿಕ್ಷಾ ಸಮಿತಿಯಲ್ಲಿ ಸೇವೆ ಸಲ್ಲಿಸುತ್ತಿದ್ದರು. ಛತ್ತಿಸ್‌ಗಢದ ಖೈರಾಗಢದ ಸಂಗೀತ ವಿಶ್ವವಿದ್ಯಾಲಯದಿಂದ ವಾದ್ಯಸಂಗೀತ ಪ್ರಕಾರದಲ್ಲಿ ಎಂಫಿಲ್ ಪದವಿ ಪಡೆದಿರುವ ಇವರನ್ನು ಸಂಪರ್ಕಿಸಬಹುದಾದ ಮಿಂಚಂಚೆ ವಿಳಾಸ: durgesh.manerao@azimpremjifoundation.org